ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ಕೋಲಾರ ನಗರಸಭೆಯಲ್ಲಿರುವ ವಾರ್ಡ್‌ಗಳ ಕುರಿತು

ಶ್ರೀ ಗೋವಿಂದ ರಾಜು(ವಿಧಾನಸಭೆಯಿಂದ ಚುನಾಯಿತರಾದವರು) –

95 (772) ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕೋಲಾರ ನಗರಸಭೆಯಲ್ಲಿರುವ ವಾರ್ಡ್‌ಗಳ ಸಂಖ್ಯೆ ಎಷ್ಟು; ಮತ್ತು ಒಟ್ಟು ವಿಸ್ತೀರ್ಣವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಕೋಲಾರ ನಗರಸಭೆಯ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಹಾಗಿದ್ದಲ್ಲಿ, ರಸ್ತೆಗಳು ಸಂಪೂರ್ಣ ಹಾಳಾಗಿರುವುದರಿಂದ ಸಾರ್ವಜನಿಕರಿಗೆ ಹಾಗೂ ವಾಹನ ಸವಾರರಿಗೆ ತುಂಬಾ ತೊಂದರೆಯಾಗುತ್ತಿರುವುದು ನಿಜವೇ;

(ಈ) ಹಾಗಿದ್ದಲ್ಲಿ, ಈ ರಸ್ತೆಗಳನ್ನು ದುರಸ್ಥಿಪಡಿಸಿ ಅಭಿವೃದ್ಧಿಪಡಿಸಲು ಇದುವರೆವಿಗೂ ಸರ್ಕಾರ ಕ್ರಮಕೈಗೊಳ್ಳದಿರುವುದು ನಿಜವೇ;

(ಉ) ಹಾಗಿದ್ದಲ್ಲಿ, ಈ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಕಾಮಗಾರಿಗಾಗಿ ಸರ್ಕಾರ ಅನುದಾನವನ್ನೇನಾದರೂ ನಿಗದಿಪಡಿಸಿ ಬಿಡುಗಡೆ ಮಾಡಿದೆಯೇ;

(ಊ) ಹಾಗಿದ್ದಲ್ಲಿ, ಯಾವ ಯಾವ ಲೆಕ್ಕ ಶೀರ್ಷಿಕೆಗಳಡಿ, ಎಷ್ಟೆಷ್ಟು ಅನುದಾನವನ್ನು ಒದಗಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಋ) ಹಾಗಿದ್ದಲ್ಲಿ, ಎಷ್ಟು ಪ್ರಮಾಣದ ಅನುದಾನವನ್ನು ಒದಗಿಸಲಾಗಿದೆ ಮತ್ತು ರಸ್ತೆ ದುರಸ್ಥಿ ಕಾಮಗಾರಿಗಳನ್ನು ಯಾವಾಗ ಕೈಗೆತ್ತಿಕೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು)